## ॥ ಪಿಳ್ಳಂಗೋವಿಯ ಚೆಲ್ವ ಕೃಷ್ಣನ ॥

ಪಿಳ್ಳಂಗೋವಿಯ ಚೆಲ್ವ ಕೃಷ್ಣನ । ಎಲ್ಲಿ ನೋಡಿದಿರಿ । ರಂಗಾನ ಎಲ್ಲಿ ನೋಡಿದಿರಿ ॥ ಪ ॥
ಎಲ್ಲಿ ನೋಡಿದರಲ್ಲಿ ತಾನಿಲ್ಲ । ದಿಲ್ಲವೆಂದು ಬಲ್ಲ ಜಾಣರು ॥ ಅ ॥

ನಂದಗೋಪನ ಮಂದಿರಗಳ ಸಂದು ಗೊಂದಿನಲಿ ।
ಚಂದ ಚಂದದ ಗೋಪಬಾಲರ ವೃಂದ ವೃಂದದಲಿ ॥
ಸುಂದರಾಂಗದ ಸುಂದರಿಯರ ಹಿಂದು ಮುಂದಿನಲಿ ।
ಅಂದದಾಕಳ ಕಂದಕರುಗಳ ಮುಂದೆ ಮುಂದೆಯಲಿ ॥ ೧ ॥

ಶ್ರೀಗುರೂಕ್ತಸದಾಸುಮಂಗಲ ಯೋಗ ಯೋಗದಲಿ ।
ಆಗಮಾರ್ಥದೊಳಗೆ ಮಾಡುವ ಯಾಗಯಾಗದಲಿ ॥
ಶ್ರೀಗೆ ಭಾಗ್ಯ ನಾಗಿವರ್ತಿಪ ಭೋಗ ಭೋಗದಲಿ ।
ಭಾಗ್ಯವಂತರು ಸದಾ ಭಾಗಿ ಪಾಡುವ ರಾಗರಾಗದಲಿ ॥ ೨ ॥

ಈ ಚರಾಚರದೊಳಗೆ ಜನಂಗಳಾಚೆ ಈಚೆಯಲಿ ।
ಖೇಚರೇಂದ್ರನ ಸುತನ ರಥದ ಚೌಕ ಪೀಠದಲಿ ॥
ನಾಚದೆ ಮಾಧವ ಎಂಬ ಭಕುತರ ವಾಚಕಂಗಳಲಿ ।
ವೀಚುಕೊಂಡದ ಪುರಂದರ ವಿಠಲನ ಲೋಚನಾಗ್ರದಲಿ ॥ ೩ ॥